# ಸುನ್ನಿ ಮಸೀದಿಗಳಲ್ಲಿ




## ಓದುವ ಸುಬಹಿ ಖುತ್ಬಾದಲ್ಲಿ
## ಮೀಲಾದುನ್ನಬಿ ಆಚರಣೆ ಇಲ್ಲ...!!!

الحركة النصيحة الإسلامية

**ANNASEEHA ISLAMIC MOVEMENT**

SURATKAL, MANGALORE - 575 014
MOB: 9731593091 / 9945171612

ಕರಾವಳಿಯ ಸುನ್ನೀ ಮಸೀದಿಗಳಲ್ಲಿ ಶುಕ್ರವಾರ 'ನುಬಾತ್ತಿಯ ಖುತ್ಬಾ' ವನ್ನು ಓದಲಾಗುತ್ತದೆ. ಇದನ್ನು ರಚಿಸಿದವರು ಇಬ್ನು ನುಬಾತ್ತತ್ತುಲ್ ಫಾರಖಿ ಎಂಬವರು. ಇವರು ಹಿಜ್ರ 337 (ಕ್ರಿ. ಶ. 948) ರಲ್ಲಿ ಸಿರಿಯಾದ ಹಳೆಯ ರಾಜಧಾನಿ ಹಲಬ್ (ಅಲಪ್ಪೋ) ಅನ್ನು ಕೇಂದ್ರವಾಗಿರಿಸಿ ಆಡಳಿತ ನಡೆಸುತ್ತಿದ್ದ ಸೈಫು-ದ್ದೌಲ ಚಕ್ರವರ್ತಿಯ ಅರಮನೆಯ ಭಾಷಣಕಾರರೂ, ಚಕ್ರವರ್ತಿಯ ಮಸೀದಿಯ ಖತೀಬರೂ ಆಗಿದ್ದರು. ಈ ಖುತ್ಬಾ ಚಕ್ರವರ್ತಿಯ ಮಸೀದಿಯಲ್ಲಿ ಓದುವುದಕ್ಕಾಗಿ ರಚಿಸಲಾದ ಖುತ್ಬಗಳಾಗಿವೆ.

ನುಬಾತ್ತಿಯ ಖುತ್ಬಾವನ್ನು ಮಲಯಾಳಂ ಭಾಷೆಗೆ ಅನುವಾದ ಮಾಡಿದ ಕೇರಳ ಸುನ್ನೀ ವಿದ್ವಾಂಸ ಕೆ.ವಿ. ಮುಹಮ್ಮದ್ ಮುಸ್ಲಿಯಾರ್ ಪಂದಾವೂರ್ ತಮ್ಮ 'ನು-ಬಾತ್ತಿಯ ಖುತ್ಬಾ ಪದಾನುಪದ ಪರಿಭಾಷೆ' ಎಂಬ ಪುಸ್ತ-ಕದ ಒಂಬತ್ತನೇ ಪುಟದಲ್ಲಿ ಇದನ್ನು ಬರೆದಿದ್ದಾರೆ. ಚಕ್ರ-

ವರ್ತಿಯ ಮಸೀದಿಯಲ್ಲಿ ಓದುವುದಕ್ಕಾಗಿ ರಚಿಸಲಾದ ಅದೇ ಖುತ್ಬಾವನ್ನು ಇಂದು ಕೂಡ ಸುನ್ನೀ ಮಸೀದಿಗಳಲ್ಲಿ ಓದಲಾಗುತ್ತದೆ.

ಈ ಖುತ್ಬಾದಿಂದ ಹೆಚ್ಚಿನವರಿಗೂ ಯಾವುದೇ ಪ್ರಯೋ-ಜನವಿಲ್ಲವೆಂದು ಅದೇ ಅನುವಾದ ಕೃತಿಯಲ್ಲಿ ಕಣ್ಣಿಯ-ತ್ತ್ ಅಬ್ದುರ್ರಹೀಮ್ ಮುಸ್ಲಿಯಾರ್ ಅಭಿಪ್ರಾಯ ಪಡು-ತ್ತಾರೆ. ಅವರು ಬರೆಯುವುದನ್ನು ನೋಡಿರಿ:

“ಎಲ್ಲಾ ಪ್ರದೇಶಗಳಲ್ಲಿರುವ ಮುಸ್ಲಿಮರ ಧಾರ್ಮಿಕ ಅಜ್ಞಾನವನ್ನು ನಿವಾರಿಸಲು ಮತ್ತು ಸಕಾಲಿಕ ವಿಷಯಗಳ ಕುರಿತು ಅವರನ್ನು ಪ್ರಜ್ಞಾವಂತರನ್ನಾಗಿಸಲು ಜುಮುಅ ನಮಾಝ್‌ಗಿಂತ ಮುಂಚೆ ಎರಡು ಖುತ್ಬಾಗಳನ್ನು ಕಡ್ಡಾ-ಯಗೊಳಿಸಲಾಗಿದೆ. ಆದರೆ ಅರಬೀ ಭಾಷೆ ತಿಳಿಯದಿ-ರುವುದರಿಂದ ಹೆಚ್ಚಿನವರಿಗೂ ಇದರಿಂದ ಪ್ರಯೋಜನ-ವಿಲ್ಲ. ಇದಕ್ಕೊಂದು ಪರಿಹಾರವೆಂಬಂತೆ ಖುತ್ಬಾವನ್ನು ಅನುವಾದಗೊಳಿಸಿ ಪ್ರಕಟಗೊಳಿಸಲಾಗುತ್ತದೆ ಎಂದು

ನಾನು ಭಾವಿಸುತ್ತೇನೆ.” (ನುಬಾತ್ತಿಯ ಖುತ್ಬಾ ಪದಾನುಪದ ಅನುವಾದ ಪುಟ 8)

ತಮ್ಮ ಖುತ್ಬಾದಿಂದ ಹೆಚ್ಚಿನವರಿಗೂ ಯಾವುದೇ ಪ್ರಯೋಜನವಿಲ್ಲ ಎಂಬ ಸತ್ಯವನ್ನು ಅರಿತೋ ಅರಿಯದೆಯೋ ಒಪ್ಪಿಕೊಂಡದ್ದಕ್ಕೆ ಕೃತಜ್ಞತೆಗಳನ್ನು ಸಲ್ಲಿಸೋಣ. ಇನ್ನು ಈ ಖುತ್ಬಾದಲ್ಲಿ ಎಲ್ಲಾ ಅರಬೀ ತಿಂಗಳಿಗೂ ಐದು ಖುತ್ಬಾಗಳಂತೆ ನಿಗದಿಗೊಳಿಸಲಾಗಿದೆ. ಇಸ್ಲಾಮೀ ಕ್ಯಾಲೆಂಡರಿನ ಪ್ರಥಮ ತಿಂಗಳು ಮುಹರ್ರಮ್ ತಿಂಗಳ ಮೊದಲ ಶುಕ್ರವಾರದ ಜುಮುಅ ಖುತ್ಬಾಕ್ಕೆ ‘ಮುಹರ್ರಮ್ ತಿಂಗಳು ಒಂದನೇ ಜುಮುಅ: ಆಶೂರಾ ಉಪವಾಸ ಶ್ರೇಷ್ಠತೆ’ ಎಂಬ ಶೀರ್ಷಿಕೆಯನ್ನು ನೀಡಲಾಗಿದೆ. ಮುಹರ್ರಮ್ ತಿಂಗಳ ಎರಡನೇ ಜುಮುಅಕ್ಕೆ ಆಶುರಾ, ತಾಸುಆ ಉಪವಾಸ ಎಂಬ ಶೀರ್ಷಿಕೆಯನ್ನು ನೀಡಲಾಗಿದೆ. ರಜಬ್ ತಿಂಗಳ ಒಂದನೇ ಜುಮುಅಕ್ಕೆ ಯುದ್ಧ ನಿಷಿದ್ಧ ತಿಂಗಳುಗಳು ಮತ್ತು ಮೂರನೇ ಜುಮು-

ಅಕ್ಕೆ ರಜಬ್‌ನ ಶ್ರೇಷ್ಠತೆ ಎಂಬ ಶೀರ್ಷಿಕೆಯನ್ನು ನೀಡಲಾಗಿದೆ. ಶಅಬಾನ್ ತಿಂಗಳ ಒಂದನೇ ಜುಮುಅಕ್ಕೆ ಬರಾಅತ್ ರಾತ್ರಿ ಎಂದೂ ಶಅಬಾನ್ ಐದನೇ ಜುಮುಅಕ್ಕೆ ರಮದಾನ್ ಬಗ್ಗೆಯೂ ಶೀರ್ಷಿಕೆ ನೀಡಲಾಗಿದೆ. ರಮದಾನ್ ತಿಂಗಳಲ್ಲಿ ರಮದಾನ್‌ನ ಬಗ್ಗೆ ಮತ್ತು ದುಲ್‌ಹಜ್ಜ್ ಪ್ರಥಮ ಹಾಗೂ ದ್ವಿತೀಯ ಜುಮುಅಗಳಲ್ಲಿ ದುಲ್‌ಹಜ್ಜ್‌ನ ಪ್ರಥಮ ಹತ್ತು ದಿನಗಳು ಮತ್ತು ಹಜ್ಜ್‌ನ ಕುರಿತು ಹೇಳಲಾಗಿದೆ. ಈ ರೀತಿ ಆಯಾ ತಿಂಗಳುಗಳಲ್ಲಿ ಬರುವ ವಿಶಿಷ್ಟ ದಿನಗಳ ಬಗ್ಗೆ ಹೇಳಲಾಗುವ ಈ ಖುತ್ಬಾಗಳಲ್ಲಿ ರಬೀಉಲ್ ಅವ್ವಲ್ ತಿಂಗಳಲ್ಲಿ ಬರುವ ಐದು ಖುತ್ಬಾಗಳ ಪೈಕಿ ಒಂದೇ ಒಂದು ಖುತ್ಬಾದಲ್ಲೂ ಕೂಡಾ ರಬೀಉಲ್ ಅವ್ವಲ್ ತಿಂಗಳಲ್ಲಿ ಪ್ರವಾದಿ(ಸ) ರವರು ಜನಿಸಿರುವರು ಎಂದಾಗಲೀ ಅಥವಾ ರಬೀಉಲ್ ಅವ್ವಲ್ ಹನ್ನೆರಡರಂದು 'ಈದ್ ಮಿಲಾದ್' ಆಚರಿಸಬೇಕೆಂದಾಗಲೀ ಒಂದು ಸೂಚನೆ ಕೂಡಾ ನೀಡಲಾಗಿಲ್ಲ. ಮಾತ್ರ-

ವಲ್ಲ ರಬೀಉಲ್ ಅವ್ವಲ್ ತಿಂಗಳ ಮೊದಲ ಹಾಗೂ ಎರಡನೇ ಶುಕ್ರವಾರದ ಜುಮುಅ ಖುತ್ಬಾಗಳಲ್ಲಿ ಪ್ರವಾದಿ(ಸ) ರವರ ವಫಾತ್‌ನ ಕುರಿತು ಹೇಳಲಾಗಿದೆ. ಅತ್ಯಂತ ಭಾವನಾತ್ಮಕವಾಗಿ ಮತ್ತು ದುಃಖದಾಯಕವಾಗಿ ವಿವರಿಸಲಾದ ಈ ಖುತ್ಬಾಗಳನ್ನು ಮಿಂಬರಿನ ಮೇಲೆ ನಿಂತು ಓದುವ ಖತೀಬರು ನಂತರ ಮಿಂಬರಿನ ಕೆಳಗಿಳಿದು ಪ್ರವಾದಿ(ಸ) ರವರ ಜನ್ಮ ದಿನಾಚರಣೆಯನ್ನು ಆಚರಿಸಬೇಕೆಂದು ಹೇಳುತ್ತಾರೆ!!

'ಈದ್ ಮಿಲಾದ್' ಎಂಬ ಅನಿಸ್ಲಾಮಿಕ ಆಚರಣೆಗೆ ಕುರ್‌ಆನ್ ಸುನ್ನತ್‌ನಲ್ಲಿ ಯಾವುದೇ ಪುರಾವೆಯಿಲ್ಲ ಎಂದು ಮಾತ್ರವಲ್ಲ ಸುನ್ನೀ ಮಸೀದಿಗಳಲ್ಲಿ ಓದಲಾಗುವ ನುಬಾತ್ತಿಯ ಖುತ್ಬಾಗಳಲ್ಲಿ ಕೂಡಾ ಈದ್‌ಮಿಲಾದ್‌ನ ಬಗ್ಗೆ ಯಾವುದೇ ಪ್ರಸ್ತಾಪವಿಲ್ಲ. ಈ ಸತ್ಯವನ್ನು ಮನದಟ್ಟು ಮಾಡಿಕೊಡುವುದಕ್ಕೋಸ್ಕರ ರಬೀಉಲ್ ಅವ್ವಲ್ ತಿಂಗಳ ಪ್ರಥಮ ಎರಡು ವಾರಗಳ ಖುತ್ಬಾಗಳನ್ನು ಇಲ್ಲಿ

ಓದುಗರಿಗಾಗಿ ಕನ್ನಡೀಕರಿಸಿ ನೀಡಲಾಗಿದೆ. ನುಬಾತ್ತಿಯ ಖುತ್ಬಾದ ಅನುವಾದಕ್ಕೆ ಇಲ್ಲಿ ಕೆ.ವಿ ಮುಹಮ್ಮದ್ ಮುಸ್ಲಿಯಾರ್ ಪಂದಾವೂರ್ ಬರೆದ ನುಬಾತ್ತಿಯ ಖುತುಬ ಪದಾನುಪದ ಅನುವಾದ ಎಂಬ ಮಲಯಾಳಂ ಕೃತಿಯನ್ನು ಅವಲಂಬಿಸಲಾಗಿದೆ.

## ರಬೀಉಲ್ ಅವ್ವಲ್-ಪ್ರಥಮ ಜುಮುಅ

## ಪ್ರವಾದಿ(ಸ) ರವರ ವಫಾತ್

ಅಲ್ಲಾಹುವಿಗೆ ಸ್ತುತಿ. ಅವನು ತನ್ನನ್ನು ಧಿಕ್ಕರಿಸಿದವರನ್ನು ಶಿಕ್ಷಿಸುತ್ತಾನೆ. ಅವನನ್ನು ವಿರೋಧಿಸಿದವನನ್ನು ನಾಶಪಡಿಸುತ್ತಾನೆ. ಬಲಪ್ರಯೋಗದಲ್ಲಿ ಏಕೈಕನು. ತನ್ನ ಪ್ರತಾಪದಲ್ಲೂ ಏಕೈಕನು. ಅವನಿಗೆ ಸ್ತುತಿ. ಅವನ ದಾನವನ್ನು ದೃಢೀಕರಿಸುವ ಸ್ತುತಿ. ಪಾಪಗಳಿಗೆ ಕ್ಷಮೆಯನ್ನು ಬೇಡುವ ಸ್ತುತಿ. ಮಾಡಿಟ್ಟ ಹೀನ ಕೃತ್ಯಗಳಿಗೆ ಪಶ್ಚಾತ್ತಾಪ ಪಡುವ ಸ್ತುತಿ. ಅಲ್ಲಾಹುವಿನ ಹೊರತು ಅನ್ಯ ಆರಾಧ್ಯನಿಲ್ಲವೆಂ-

ಬುದಕ್ಕೆ ನಾನು ಸಾಕ್ಷಿ. ಅವನು ಏಕೈಕನು, ಸಹಭಾಗಿ ರಹಿತನು. ಸಂದೇಹವು ಉಳಿಯದ ದೃಢವಾದ ಸಾಕ್ಷ್ಯ, ನಿಷ್ಕಳಂಕ ವಚನದಿಂದಿರುವ ಸಾಕ್ಷ್ಯ, ನಿಷೇಧಿ ವಾದಿಸುವ ಮತ್ತು ಆರೋಪಿಸುವ ಕಾರ್ಯಗಳಿಂದ ವಿದೂರವಾದ ಸಾಕ್ಷ್ಯ, ಮುಹಮ್ಮದ್(ಸ) ಅಲ್ಲಾಹುವಿನ ದಾಸರು ಮತ್ತು ಸಂದೇಶವಾಹಕರು (ಎಂಬುದಕ್ಕೆ) ನಾನು ಸಾಕ್ಷಿ. ಮರೆ-ಮಾಚಲ್ಪಟ್ಟ ಕಾರ್ಯಗಳಲ್ಲಿ ಪ್ರಾಮಾಣಿಕರು. ಎಲ್ಲ ನ್ಯೂನತೆಗಳೂ, ಮಾಲಿನ್ಯಗಳೂ ನೀಗಿದ ಶುದ್ಧರು. ಅಲ್ಲಾಹುವಿನ ಅನುಗ್ರಹ ಧಾರೆಯು ಮುಹಮ್ಮದ್(ಸ) ರಿಗೂ, ಅವರ ಕುಟುಂಬಕ್ಕೂ ವರ್ಷಿಸಲಿ. ಅತ್ಯುತ್ತಮ-ವೂ, ಅತಿಶುದ್ಧವೂ ಆದ ಅನುಗ್ರಹಧಾರೆ. ಕರಾಮತ್ತಿನ ಪರಮೋನ್ನತಿಯಲ್ಲಿ, ಉತ್ತುಂಗ ಸ್ಥಿತಿಯಲ್ಲಿ ಅಲ್ಲಾಹು ಅವರನ್ನು ಪ್ರತಿಷ್ಠಾಪಿಸಲಿ.

ಜನರೇ, ದೇವದಾಸರೇ, ತಕ್ವಾ ಕೈಗೊಳ್ಳಿರಿ. ನಿಮ್ಮ ಪೈಕಿ ಯಾರೂ ಕೂಡಾ ಪ್ರವಾದಿ(ಸ) ಗಿಂತ ಶ್ರೇಷ್ಠರಲ್ಲ.

ಅಲ್ಲಾಹುವಿನ ವಿಶೇಷ ದಾಸರೂ, ಆರಿಸಲ್ಪಟ್ಟವರೂ ಆದ ಪ್ರವಾದಿ(ಸ) ರಿಗಿಂತ ಹೆಚ್ಚಿನ ಮಹತ್ವ ನಿಮಗಾರಿಗೂ ಇಲ್ಲ. ಆ ಪ್ರವಾದಿಗೂ ಕೂಡಾ ಆಯುಷ್ಯವು ಮುಗಿದಾಗ ಅವಧಿ ದೀರ್ಘಗೊಳಿಸಿಲ್ಲ. ಸಮಯವು ಆಗತವಾದಾಗ ಆಯುಷ್ಯ ಲಭಿಸಲಿಲ್ಲ. ಆದರಣೀಯರಾದ ದೇವದೂತ-ರು (ಮಲಕ್‌ಗಳು) ಪ್ರವಾದಿ(ಸ) ರವರನ್ನು ಸಮೀಪಿಸಿದ್ದು ಇದರಂತಿರುವ ಒಂದು ರಬೀವುಲ್ ಅವ್ವಲ್‌ನ (ತಿಂಗಳ) ಲ್ಲಾಗಿದೆ. ಮಾನವರ ರೂಹ್ ಅನ್ನು ಹಿಡಿಯುವ ಮರಣ ದೂತರು, ಪ್ರವಾದಿ(ಸ) ರವರ ಪವಿತ್ರ ರೂಹ್ ಅನ್ನು ಹಿಡಿಯುವ ಪ್ರಯತ್ನವನ್ನು ಅವರು ಆರಂಭಿಸಿದರು. ಅಲ್ಲಾಹುವಿನ ಅನುಗ್ರಹ ಮತ್ತು ಕ್ಷಮೆಯೆಡೆಗೆ ಅದನ್ನು ಕೊಂಡೊಯ್ಯಲು ಅವರು ಪ್ರಯತ್ನವನ್ನು ಆರಂಭಿಸಿದ-ರು, ಒಳಿತಿನೆಡೆಗೆ ಮತ್ತು ಉತ್ಕರ್ಷತೆಯೆಡೆಗೆ!

ಅದರೊಂದಿಗೆ ಪ್ರವಾದಿ(ಸ) ರವರು ನರಳಲು, ನೋವು ಸಹಿಸಲು ಆರಂಭಿಸಿದರು. ಪ್ರಯಾಸವೂ, ನಿಟ್ಟುಸಿರುಗ-

ಳೂ ಹೊರಟವು. ಎಡ, ಬಲ ಕಾಲುಗಳನ್ನು ಚಾಚಲು ಮತ್ತು ಮಡಚಲು ಆರಂಭಿಸಿದರು. ಅದರ (ಮರಣದ) ಕಾಠಿಣ್ಯತೆಯಿಂದಾಗಿ ಹಣೆಯು ಬೆವರಿತು. ಪ್ರವಾದಿ(ಸ) ರವರ ಸ್ಥಿತಿಯನ್ನು ನೋಡಿದವರೆಲ್ಲರೂ ಅತ್ತರು. ಈ ನೋವನ್ನು ಪ್ರವಾದಿ(ಸ) ರವರಿಂದ ಪಡೆಯಲು ನೋಡುವವರೆಲ್ಲರೂ ಸಿದ್ಧರಾದರು. ಆದರೆ ಈ ವ್ಯಥೆಗಳಾವುದೂ ವಿಧಿಯನ್ನು ತಡೆಯಲು ಸಾಧ್ಯವಾಗಲಿಲ್ಲ. ಕುಟುಂಬವನ್ನೋ, ಸಮುದಾಯವನ್ನೋ, ಮಲಕ್‌ಗಳು ಗಣನೆಗೆ ತೆಗೆದುಕೊಳ್ಳಲಿಲ್ಲ. ಆದರೆ ಮರಣದೂತರು ಆಜ್ಞೆಯನ್ನು ನೆರವೇರಿಸುತ್ತಿದ್ದರು. ವಿಧಿಫಲಕದಲ್ಲಿ ಬರೆದಿಟ್ಟ ಪ್ರಕಾರ ಮಲಕ್‌ಗಳು ಕಾರ್ಯನಿರ್ವಹಿಸಿದರು.

ಮೊತ್ತಮೊದಲು ಗೋರಿಯಿಂದೆದ್ದು ಹೊರಬರುವವರು ಪ್ರವಾದಿ(ಸ) ರವರಾಗಿದ್ದಾರೆ. ಅವರು ಪರಲೋಕದಲ್ಲಿ ವಿಚಾರಣಾ ದಿನದಂದು ಶಿಫಾರಸ್ಸುದಾರರಾಗಿರುವರು. ಆಕಾಶ ಭೂಮಿಗಳಲ್ಲಿರುವವರ ಪೈಕಿ ಅತ್ಯಂತ ಆದ-

ರಣೀಯರು. ಖಂಡಿತವಾಗಿಯೂ ಪರಲೋಕದಲ್ಲಿ ರಕ್ಷಣೆ ಹೊಂದಿದ ಮಹಾತ್ಮರು. ಸಾಕ್ಷಿಗಳು ಎದ್ದೇಳುವ ದಿನದಂದು ಖಂಡಿತವಾಗಿಯೂ ಆದರಣೀಯರಾದ-ವರು. (ಆ ಪ್ರವಾದಿಗೆ ಕೂಡಾ ಆಯುಷ್ಯ ಮುಂದೂಡಿ ನೀಡಲಾಗಿಲ್ಲ) ಹೀಗಿರುತ್ತಾ ನಮ್ಮೆಲ್ಲರ ಸ್ಥಿತಿಯೇನು? ಯಾತ್ರೆ ಯಾವಾಗೆಂದು ಕೂಡಾ ನಮಗೆ ತಿಳಿದಿಲ್ಲ. ಶಾಶ್ವತವಾಸ ಎಲ್ಲೆಂದು ಕೂಡಾ ತಿಳಿದಿಲ್ಲ. ಯಾವುದರ ಕಡೆಗೆ ಮುನ್ನಡೆಯುವೆವೆಂದು ಕೂಡಾ ತಿಳಿದಿಲ್ಲ. ಅಂ-ತ್ಯದಿನದಂದು ವಿಧಿಸಲ್ಪಡುವುದೇನೆಂದೂ ತಿಳಿದಿಲ್ಲ. ಓ ನಾಶ ಹೊಂದಿದವರ ಹಿಂಬಾಲಕರೇ, ಗತಿಸಿ ಹೋದವರ ಅವಶೇಷವೇ, ಓ ದೇಹೇಚ್ಛೆಗಳ ದಾಸರೇ, ಓ ನಾಶದ ಸಹಚರರೇ, ಓ ದಿನಗಳು ನಿಗದಿಗೊಳಿಸಲ್ಪಟ್ಟವರೇ, ಓ ಮೋಹಗಳ ದಾಸರೇ,

ಪ್ರವಾದಿ(ಸ) ರವರಿಗೆ -ಮುರ್ಸಲ್‌ಗಳ ನೇತಾರರಿಗೆ- ಸಂಭವಿಸಿದ ಮರಣದಿಂದ ನೀವು ಪಾಠ ಕಲಿಯುವು-

ದಿಲ್ಲವೇ? ಮುತ್ತಕೀನ್‌ಗಳ ಇಮಾಮರಾದ ಪ್ರವಾದಿ(ಸ) ರವರಿಗೆ, ಜಗತ್ಪ್ರಭುವಿನ ಹಬೀಬರಿಗೆ,

ನೀವು ಇಹದಲ್ಲಿ ಶಾಶ್ವತರೆಂದು ಭಾವಿಸಿರುವಿರೋ? ಮರಣದಿಂದ ನೀವು ಸುರಕ್ಷಿತರೆಂದು ಭಾವಿಸಿರುವಿ-ರೋ? ನಿಮ್ಮ ಭಾವನೆಯು ಮಹಾಕೆಟ್ಟದು! ಅದೆಷ್ಟು ವಿದೂರ! ನಿಮ್ಮನ್ನು ಮರಣವು ಹಿಡಿಯುವುದು. ಅಲ್ಲಾ-ಹನಾಣೆ! ನಿಮ್ಮ ಪ್ರಯಾಣದ ವೇಳೆಯು ಆರಂಭವಾ-ಗಿದೆ! ಅಗತ್ಯವಿರುವ ಸಾಮಗ್ರಿಗಳನ್ನು ಸಿದ್ದಗೊಳಿಸಿರಿ. ವಿಚಾರಣೆಯು ಅನಿವಾರ್ಯವಾಗಿದೆ, ಅರ್ಹ ಉತ್ತ-ರವನ್ನು ಸಿದ್ದಪಡಿಸಿಕೊಳ್ಳಿರಿ. ವಿರಹದ ವಿಲಾಪಣೆಯು ನಿಮ್ಮಲ್ಲಿ ಆರಂಭವಾದ ಹಾಗಿದೆ. ಆಪತ್ತಿನ ಬೀಸುಕಲ್ಲು ನಿಮ್ಮಲ್ಲಿ ಬೀಸಲ್ಪಟ್ಟ ಹಾಗಿದೆ. ಹೀಗಿದ್ದೂ ಪಾಪಕೃತ್ಯಗ-ಳನ್ನು ಕಡಿಮೆಗೊಳಿಸಲು ನಿಮಗೆ ಸಾಧ್ಯವಾಗುವುದಿಲ್ಲ. ಪುಣ್ಯಕರ್ಮಗಳನ್ನು ನೀವು ಹೆಚ್ಚಿಸುವುದಿಲ್ಲ. ನಿಮಗಿಂತ ಮುಂಚಿನ ತಲೆಮಾರಿನವರು ಎಲ್ಲಿಹೋದರು? ಸುರ-

ಕ್ಷಿತ ಪ್ರತಾಪಶಾಲಿಗಳು! ನಿಮಗಿಂತ ದೀರ್ಘಾಯುಷ್ಯವಿದ್ದ ಅವರೆಲ್ಲಿ? ಭೂಮಿಯಲ್ಲಿ ಧಾರಾಳ ಲಾಂಛನ ಉಂಟು-ಮಾಡಿದ ಅವರೆಲ್ಲಿ !?

ಅಲ್ಲಾಹನಾಣೆ! ಮರಣವು ಅವರ ಆಯುಷ್ಯವನ್ನು ನುಂಗಿಹಾಕಿತು. ಅಪಘಾತಗಳು ಅವರ ಗುರುತುಗಳ-ನ್ನು ಮರೆಮಾಚಿದವು. ಪೂರ್ಣ ಗರ್ಭಿಣಿಗಳಾದ ಅವರ ಒಂಟೆಗಳು ಉಪೇಕ್ಷಿಸಲ್ಪಟ್ಟವು. ಮರಣದಿಂದಾಗಿ ಅವರ ಮನೆಗಳು ನಿರ್ಜನಗೊಳಿಸಲ್ಪಟ್ಟವು, ಅವರ ಮನೆಗಳು ನಾಶವಾದವು. ಮಣ್ಣುಗುಂಡಿಗಳ ಕೆಳಗೆ ಅವರು ಜೀ-ರ್ಣಿಸಿಹೋದರು. ದೀರ್ಘ ಕಾಲದ ಜೀರ್ಣತೆಯಿಂದಾ-ಗಿ ಧೂಳಿಯಾಗಿ ಮಾರ್ಪಟ್ಟರು. ಭೀಕರ ಪ್ರಾಣಿಗಳಿಗೆ ಆಹಾರ! ಮೇಕೆಗಳು ಮೇಯುವ ಸ್ಥಳ! ಮಣ್ಣಿನ ಸಂಕೇ-ತವಾದರು! ವಿಚಾರಣೆಯ ದಿನದ ತನಕ. ಸ್ವಂತ ಕರ್ಮಗ-ಳನ್ನು ಅವರಿಗೆ ತೋರಿಸುವುದಕ್ಕೋಸ್ಕರ ಅಂದು ಜನರು ಹಲವು ವಿಭಾಗಗಳಾಗಿ ಮಾರ್ಪಡುವರು, ಅಣುತೂಕ-

ದಷ್ಟು ಒಳಿತನ್ನೆಸಗಿದವನು ಅದನ್ನು ಕಾಣುವನು, ಕೆಡು-ಕನ್ನೆಸಗಿದವನು ಕೂಡಾ. ಉಪದೇಶ ಸ್ವೀಕರಿಸುವವರಲ್ಲಿ ಅಲ್ಲಾಹು ನಮ್ಮನ್ನೂ ನಿಮ್ಮನ್ನೂ ಸೇರಿಸಲಿ. ವರ್ಧಿಸಿದ ಪಾಲು ಲಭಿಸುವವರಲ್ಲಿ ಸೇರಿಸಲಿ. ಹೇಳಲಾಗುವ ಮಾ-ತುಗಳಲ್ಲಿ ಅತಿವಿಶಿಷ್ಟವೂ ಕಾಲವು ಕೈಗೊಂಡಿರುವುದರ-ಲ್ಲಿ ಅತಿಶಕ್ತವಾದುದೂ ಆಗಿದೆ ಔದಾರ್ಯ ಮತ್ತು ಸಾ-ಮರ್ಥ್ಯವಂತನ ವಚನ! ಪ್ರವಾದಿವರ್ಯರೇ, ತಮಗಿಂತ ಮುಂಚೆ ಮಾನವರ ಪೈಕಿ ಯಾರೂ ಕೂಡಾ ಇಲ್ಲಿ ಶಾಶ್ವತವಾಗಿ ಜೀವಿಸಿಲ್ಲ. ತಾವು ಮೃತಪಟ್ಟರೆ ಅವರಿಲ್ಲಿ ಶಾಶ್ವತವಾಗಿ ಜೀವಿಸುವರೋ? ಎಲ್ಲ ಆತ್ಮ(ಶರೀರ)ವೂ ಮರಣದ ರುಚಿಯನ್ನು ಅನುಭವಿಸುವುದು. ನಿಮ್ಮನ್ನು ಒಳಿತು ಮತ್ತು ಕೆಡುಕುಗಳ ಮೂಲಕ ಪರೀಕ್ಷಿಸುವೆವು. ಇದು ಪರೀಕ್ಷೆಯಾಗಿದೆ. ನಿಮ್ಮ ಮರಳುವಿಕೆಯು ಅಲ್ಲಾ-ಹುವಿನೆಡೆಗೇ ಆಗಿದೆ.

## ರಬೀಉಲ್ ಅವ್ವಲ್ - ದ್ವಿತೀಯ ಜುಮ್‌ಅ

## ಪ್ರವಾದಿ(ಸ) ರವರ ವಫಾತ್ (ಮುಂದುವರಿಕೆ)

ಅಲ್ಲಾಹುವಿಗೇ ಸ್ತುತಿ. ಅವನು ತನ್ನ ರಚನೆಯನ್ನು ಪೂರ್ಣರೂಪದಲ್ಲಿ ನಿರ್ವಹಿಸಿದಾಗ ಅದು ಸಂತುಲಿ-ತಗೊಂಡಿತು. ಅವನು ಆಹಾರವನ್ನು ಎಲ್ಲಾ ಜೀವಿ-ಗಳಿಗೂ ನೀಡಿದಾಗ ಅದೆಲ್ಲಕ್ಕೂ ಬಂದು ತಲುಪಿತು. ಅದಕ್ಕೆ ಕೃತಜ್ಞತೆಯನ್ನರ್ಪಿಸುವುದನ್ನು ಬಾಧ್ಯತೆಯ-ನ್ನಾಗಿಸಿದಾಗ ಅದು ಅನಿವಾರ್ಯವಾಯಿತು. ಅವನ ಕಾರ್ಯವು ಮಹತ್ತರವಾದಾಗ ಅದು ವಿಜಯ ಹೊಂದಿತು. ಅವನಿಗೇ ಸ್ತುತಿ, ಸ್ತುತಿಸಲು ತೌಫೀಕ್ ಲಭಿಸಿದವನ ಸ್ತುತಿ. ವಾಗ್ದಾನವನ್ನು ನಂಬಿದವನ ಸ್ತುತಿ. ಉದ್ದೇಶವನ್ನು ಸಾಕ್ಷಾತ್ಕರಿಸಿದವನ ಸ್ತುತಿ. ಅಲ್ಲಾಹುವಿನ ಅಭಯವನ್ನು ಆಶ್ರಯಿಸಿದವನ ಸ್ತುತಿ. ಅಲ್ಲಾಹುವಲ್ಲ-ದೆ ಆರಾಧ್ಯನಿಲ್ಲ, ಅವನು ಏಕೈಕನು, ಸಹಭಾಗಿರಹಿ-

ತನು ಎಂಬುದಕ್ಕೆ ನಾನು ಸಾಕ್ಷಿ. ಮಾತಾಡಬಲ್ಲ ಎಲ್ಲ ಸೃಷ್ಟಿಗಳ ಕರ್ತವ್ಯವಾದ ಸಾಕ್ಷಿ. ಸಹಮತವಿರುವ ಎಲ್ಲ ನಿರೀಕ್ಷಕರನ್ನೂ ಆಕರ್ಷಿಸುವ ಸಾಕ್ಷ. ಪ್ರವಾದಿ ಮು-ಹಮ್ಮದ್(ಸ) ರವರು ಅಲ್ಲಾಹುವಿನ ದಾಸರೂ, ಸಂ-ದೇಶವಾಹಕರೂ ಎಂಬುದಕ್ಕೆ ನಾನು ಸಾಕ್ಷಿ. ಜನರು ದುರ್ಮಾರ್ಗದಲ್ಲಿ ಅಲೆದಾಡುತ್ತಿರುವಾಗ ಅಲ್ಲಾಹು ಪ್ರ-ವಾದಿ(ಸ) ರವರನ್ನು ಕಳುಹಿಸಿದನು. ಅಸಂಭವನೀಯ ಕಾರ್ಯಗಳನ್ನು ಅವರು ಅನ್ವೇಷಿಸಿ ಅಲೆದಾಡುತ್ತಿದ್ದಾಗ ಪ್ರವಾದಿ(ಸ) ರವರು ಆಗಮಿಸಿದರು. ಅವರು ಕರಾರು ಮತ್ತು ಒಪ್ಪಂದಗಳನ್ನು ಗಾಳಿಗೆ ತೂರುತ್ತಿದ್ದರು. ನಿಷೇಧದ ಅಸ್ತ್ರದ ಮೂಲಕ ಅವರು ಎದುರಿಸುತ್ತಿದ್ದರು. ಪ್ರವಾದಿ-(ಸ) ರವರು ಆ ಕೆಡುಕಿನ ವಕ್ತಾರರನ್ನು ಅಭಿಮುಖೀಕ-ರಿಸಿದರು. ಅದು ವರ್ಧಿಸುವ ದುಷ್ಕರ್ಮಿಗಳ ವಿಷವನ್ನು ಎದುರಿಸಿದರು. ಸಮೂಹದ ಕ್ಷೋಭೆಯನ್ನು ಕೊನೆಗೊ-ಳಿಸಲು ತೀರ್ಮಾನಿಸಿದರು. ಸಮುದಾಯದ ಒಳಿತನ್ನು

ವ್ಯಕ್ತಪಡಿಸಿದರು. ಮಾರಣಾಂತಿಕ ರೋಗಗಳನ್ನು ವಿನಾಶಕಾರಿಯಾದ ದೇಹೇಚ್ಚೆಗಳನ್ನೂ ತೋರಿಸಿಕೊಟ್ಟರು. ಕೊನೆಯಲ್ಲಿ ಒಪ್ಪಂದಗಳ ಸರಮಾಲೆಗಳುಂಟಾದವು. ಸುಳ್ಳಿನ ಮುಳ್ಳುಗಳು ಕಣ್ಮರೆಯಾದವು. ಇಸ್ಲಾಮಿನ ನಕ್ಷತ್ರಗಳು ಬೆಳಗಿದವು. ದುಷ್ಟರ ಪರಿವಾರ ಹರಿದುಹಂಚಾಯಿತು. ಪ್ರವಾದಿ(ಸ) ರವರು ಮತ್ತು ಅವರ ಉತ್ಕೃಷ್ಟರೂ, ಆದರಣೀಯರೂ ಆದ ಕುಟುಂಬದ ಮೇಲೆ ಅಲ್ಲಾಹು ತನ್ನ ಅನುಗ್ರಹವನ್ನು ವರ್ಷಿಸಲಿ. ಎಂದೆಂದಿಗೂ ನಿಂತು ಹೋಗದ ಮತ್ತು ಬರಡಾಗದ ಅನುಗ್ರಹ!

ಜನರೇ, ನಾನಿದೋ ನನ್ನೊಂದಿಗೆ ಮತ್ತು ನಿಮ್ಮೊಂದಿಗೆ ತಕ್ವಾ ಕೈಗೊಳ್ಳಲು ಉಪದೇಶಿಸುತ್ತೇನೆ. ನಾಶವು ಸಮಗ್ರವಾಗಿದೆ, ಅನಶ್ವರತೆತೆಗೆ ಯಾವುದೇ ಮಾರ್ಗವಿಲ್ಲ. ವಿಧಿ ಪೂರ್ಣಗೊಂಡಿತು. ಇನ್ನು ಅದರ ಅನಿಷೇಧ್ಯ ಸ್ಥಿತಿಗೆ ಯಾವುದೇ ಬದಲಾವಣೆಯಿಲ್ಲ. ಮರಣಕಡಲು ಬೀಸುತ್ತಿದೆ. ಎಲ್ಲ ಮಾರ್ಗದರ್ಶಕರೂ ಇಲ್ಲಿ ವಿಭ್ರಾಂತ-

ರು. ಆತ್ಮವನ್ನು ಕಿತ್ತುಕೊಂಡು ಹೋಗಲು ಅದು ಸಿದ್ಧ-ವಾಗಿ ನಿಂತಿದೆ. ನಾಶವನ್ನು ಹರಡುವ ಜವಾಬ್ದಾರಿಯನ್ನು ಮರಣವು ವಹಿಸಿಕೊಂಡಿದೆ.

ಮರಣವನ್ನು ತಡೆಯಲು ಜನ್ಮತಃ ಇರುವ ಮಹತ್ವದಿಂದ ಸಾಧಿಸುತ್ತಿದ್ದರೆ, ವಿಧಿಯನ್ನು ತಡೆಯಲು ಮಹತ್ತರವಾದ ಸ್ಥಾನದಿಂದ ಸಾಧ್ಯವಾಗುತ್ತಿದ್ದರೆ, ಆಪತ್ತನ್ನು ತಡೆಯಲು ಸುಂದರವಾದ ವದನವು ಪ್ರಯೋಜನಕಾರಿಯಾಗುತ್ತಿದ್ದ-ರೆ, ಮೊಟ್ಟಮೊದಲು ಮಹತ್ವಪೂರ್ಣರಾದ ಪ್ರವಾದಿ(ಸ) ರವರು ರಕ್ಷೆ ಹೊಂದುತ್ತಿದ್ದರು. ಆದರೆ ಇದರಂತಿರುವ ಒಂದು ರಬೀಉಲ್ ಅವ್ವಲ್‌ನಲ್ಲಿ ಪ್ರವಾದಿ(ಸ) ರವರು ವಫಾತಾದರು. ವಿಧಿಸಲ್ಪಟ್ಟ ಮರಣ ಪಾಶವು ಪ್ರವಾದಿ-(ಸ) ರವರನ್ನು ಆವರಿಸಿತು. ಅನರ್ಘ್ಯವಾದ ಆತ್ಮವನ್ನು ಹಿಡಿಯಲು ಮಲಕ್‌ಗಳು ಬಂದರು. ಮರಣದ ಹಿಡಿ-ತದಿಂದ ಪ್ರವಾದಿ(ಸ) ರವರನ್ನು ವಿಮೋಚಿಸಲು ಸೃಷ್ಟಿ-ಗಳಿಗೆ ಸಾಧ್ಯವಾಗದೆ ಹೋಯಿತು. ಕೊನೆಗೆ ಕೊರಳಲ್ಲಿ

ಸುತ್ತಿದಾಗ, ಶ್ವಾಸವು ಮರಣದ ಹಿಡಿತದಲ್ಲಿ ಅದುಮಲ್ಪಟ್ಟಾಗ, ಬಲಗಾಲನ್ನು ಚಾಚಿ ಎಡಗಾಲನ್ನು ಮಡಚುತ್ತಿದ್ದಾಗ, ಅವಯವಗಳು ಮತ್ತು ಅಂಗಾಂಗಗಳು ನೋವನುಭವಿಸಿದಾಗ, ಆ ವೇಳೆಯ ನೋವು ಪ್ರವಾದಿ(ಸ) ರವರ ಹಣೆಯಲ್ಲಿ ಬೆವರನ್ನು ಮೂಡಿಸಿದವು, ಅಗಲಲು ಸಮಯವಾಯಿತೆಂದು ಪ್ರವಾದಿ(ಸ) ರವರಿಗೆ ಅರುಹಿದವು. ಸಂಶುದ್ದೆಯಾದ ಪುತ್ರಿ ಫಾತಿಮಾ ಅತ್ತರು. ವಿರಹ ದುಃಖಾಗ್ನಿಯನ್ನು ನುಂಗುವ ಪುತ್ರಿ ಗದ್ಗದಿತರಾದರು. ಓ ನನ್ನ ನೋವು! ಓ ತಂದೆಯೇ! ತಮ್ಮ ನೋವನ್ನು ಕಾಣಬೇಕಾಗಿ ಬಂದ ನನ್ನ ನೋವು!! ಇದಕ್ಕೆ ಪ್ರವಾದಿ-(ಸ) ರವರು ಉತ್ತರಿಸಿದರು, ಮಗಳನ್ನು ಆಲಿಂಗಿಸುತ್ತಾ ವಿದಾಯ ಕೋರುತ್ತಾ ಪ್ರವಾದಿ(ಸ) ರವರು ಹೇಳಿದರು;

ಓ ಪುತ್ರಿ , ನಿನ್ನ ತಂದೆಗೆ ಈ ದಿನದ ಬಳಿಕ ನೋವಿಲ್ಲ, ಮಗಳೇ, ತೂಕಡಿಕೆಯಾಗಲೀ, ನಿದ್ದೆಯಾಗಲೀ ಬಾಧಿಸದ ಪ್ರಭು ನಿನ್ನ ತಂದೆಗೆ ಮುಂದೆ ನೋವಿನಿಂದ ನಿರ್ಭಯತ್ವ-

ವನ್ನು ನೀಡಿರುವನು. ಹಸನ್ ಮತ್ತು ಹುಸೈನ್ ದುಃಖಿಸಿದರು, ಓ ನಮ್ಮ ತಾತಾ!!

ಬೀವಿ ಆಯಿಶಾ ದುಃಖಿಸಿದರು, ಓ ನನ್ನ ಅಬುಲ್ ಕಾಸಿಮ್!!

ಯಾವ ಉನ್ನತ ಕುಲಗೋತ್ರದವನು ಇಲ್ಲಿ ತಲೆ ಎತ್ತಲಿಲ್ಲ?

ಯಾವ ಕಣ್ಣು ಇಲ್ಲಿ ಅಳಲಿಲ್ಲ?

ಪ್ರವಾದಿ(ಸ) ರವರ ಬೇರ್ಪಡುವಿಕೆಯಲ್ಲಿ ಅಧಿಕವಾಗದ ದುಃಖ ಯಾವುದು?

ಅದರ ವಿದೂರತೆಯಿಂದ ಅಪ್ರಾಪ್ಯವಾಗದ ಸಾಂತ್ವನ ಯಾವುದು?

ಆದರೆ ಪ್ರವಾದಿ(ಸ) ರವರು ಕುಡಿದದ್ದು ಮರಣದ ಶುದ್ಧ ಹೂಜಿಯಿಂದಾಗಿದೆ. ಅಂತ್ಯ ದಿನದಂದು ಉಂಟಾಗುವ ಸಂದೇಹದ ನಹ್ಸ್‌ಗಳಿಂದೆಲ್ಲಾ ಪ್ರವಾದಿ(ಸ) ರವರು ನಿ-

ರ್ಭಯರಾಗಿರುವರು. ಪ್ರವಾದಿ(ಸ) ರವರು ವಿಚಾರಣಾ ದಿನದಂದು ಶಿಫಾರಸ್ಸುಗಾರರಾಗಿರುವರು. ಆಕಾಶ ಭೂಮಿಗಳಲ್ಲಿ ಅತ್ಯಾದರಣೀಯರು.

ಆದರೆ ಮಹಾಪಾಪಗಳಲ್ಲಿ ವಂಚಿತರಾದ ನಮ್ಮ ಸ್ಥಿತಿಯೇನಾಗಿರುವುದು? ಆಪತ್ತು ಎರಗುವುದರಲ್ಲಿ ನಿರ್ಭಯರೂ, ಲೌಕಿಕ ಸುಖಾಡಂಬರಗಳಲ್ಲಿ ತಲ್ಲೀನರೂ ಆದ ನಮ್ಮ ಅಂತ್ಯವು ಶುದ್ಧವಾದ ನಂತರ ಮಲಿನವಾದದ್ದೇ ಆಗಿದೆ. ಸಿಹಿಯ ಬಳಿಕ ಅಂತ್ಯವು ಖಂಡಿತವಾಗಿಯೂ ಕಹಿಯಾಗಿರುವುದು. ಕೊನೆಯಲ್ಲಿ ಮರಣವು ಅನೀರೀಕ್ಷಿತವಾಗಿ ಬಂದೆರಗುವುದು. ದುರ್ನಾತ ಬೀರುವ ಅಸಹ್ಯಕರವಾದ ಹೂಜಿಯಿಂದ ಮರಣದ ರುಚಿ ಸವಿಯಬೇಕಾಗುವುದು. ದುಷ್ಕರ್ಮಗಳಿಗೆ ಪ್ರತಿಫಲ ಲಭಿಸುವುದು. ಆಯುಷ್ಯವು ಮುಗಿದರೆ, ಸ್ಥಿತಿಗತಿಗಳು ಬದಲಾಯಿಸಲ್ಪಟ್ಟರೆ, ಅವಧಿಗೋಸ್ಕರ ನೆಪಗಳನ್ನು ಹೇಳುವಾಗ, ಮೋಹಗಳ ಬೇರು ಕಿತ್ತೆಸೆಯಲ್ಪಡುವಾಗ, ಕೋಪಾಧಿ-

ಷ್ಟಿತರಾದ ಮಲಕ್‌ಗಳನ್ನು ಕಾಣುವಾಗ, ಮರಳಲ್ಪಡುವ ಕೆಟ್ಟ ಸ್ಥಾನದ ಕುರಿತು ಮುನ್ನೆಚ್ಚರಿಕೆ ನೀಡುವ ಮಲ-ಕ್‌ಗಳು, ವಾಹ್! ಅದೆಂತಹ ವಿನಾಶಕರವಾದ ಪತನ! ಅದೆಷ್ಟು ಕಹಿಯಾದ ಪಾನೀಯ! ಅದೆಷ್ಟು ಸನಿಹದ ಯಾತ್ರೆ! ಅದೆಷ್ಟು ಸಂಕಷ್ಟಕರವಾದ ವಿಷಮಾವಸ್ಥೆ! ಬಾ-ಕಿಯಾಗಬೇಕೆಂದು ಬಯಸುವವರು ಅದು ಹೇಗೆ ಇನ್ನೂ ಬಯಸುತ್ತಾರೆ? ಅವರು ಈ ಆಲಿಸುತ್ತಿರುವುದೆಲ್ಲವನ್ನೂ ಸತ್ಯವೆಂದು ನಂಬುತ್ತಿದ್ದಾರೆ. ಕೊರತೆಯೆಸಗುವವರಿಗೆ ನಿರೀಕ್ಷಿಸಲೇನಿದೆ? ವಂಚಿತರು ಯಾವ ನೆಪಗಳನ್ನೊ-ಡ್ಡುವರು? ಮರಣದಿಂದ ಅವರನ್ನು ಬಚ್ಚಿಡಬಹುದೆಂ-ದು ಭಾವಿಸುತ್ತಾರೋ? ಶಾಶ್ವತವಾಗಿ ಅವರನ್ನು ಬಾ-ಕಿಯಾಗಿಸಲಾಗುವುದೆಂದು ಭಾವಿಸುತ್ತಿದ್ದಾರೆಯೇ? ಪ್ರಭುವಿನ ಶಿಕ್ಷೆಯಿಂದ ಅವರನ್ನು ಮರೆಮಾಚಬಹುದೆಂ-ದು ಅವರು ಭಾವಿಸುತ್ತಿದ್ದಾರೆಯೇ? ಅವರ ಊಹೆಯು ಮಹಾಕೆಟ್ಟದು!! ಆದರೆ ಮೃತ್ಯುವು ಅನೀರೀಕ್ಷಿತವಾಗಿ

ಬಂದು ಅವರನ್ನು ಮೊಣಕಾಲೂರಿಸುವುದು, ಆಗ ಅದನ್ನು ತಡೆಯಲಾಗದು, ಅವಧಿ ನೀಡಲಾಗದು!!! ಇಹಲೋಕದಲ್ಲಿ ಅಲ್ಪಕಾಲ ಮಾತ್ರವೇ ಇರುವುದೆಂದು ಅರಿತುಕೊಳ್ಳುವವರಲ್ಲಿ ಅಲ್ಲಾಹು ನಮ್ಮನ್ನು ಸೇರ್ಪಡಿ-ಸಲಿ. ಮರಣದ ಆಗಮನವನ್ನು ಕಾದು ಸಿದ್ದರಾಗಿರುವ-ವರಲ್ಲಿ ಅಲ್ಲಾಹು ನಮ್ಮನ್ನೂ ಸೇರಿಸಲಿ. ಅಲ್ಲಾಹುವನ್ನು ಅನುಸರಿಸಲು ಯೌವ್ವನ ಮತ್ತು ವೃದ್ಧಾಪ್ಯವನ್ನು ವ್ಯಯಿ-ಸಿದವರಲ್ಲಿ ಅಲ್ಲಾಹು ನಮ್ಮನ್ನೂ ಒಳಪಡಿಸಲಿ.

ವ್ಯಥೆ ಮತ್ತು ದುಃಖಗಳನ್ನು ಹೋಗಲಾಡಿಸುವುದರಲ್ಲಿ ಅತ್ಯಂತ ಸಮರ್ಥವೂ, ಹೃದಯಗಳೂ, ಮನಸ್ಸುಗಳೂ, ಹೃದಿಸ್ಥಗೊಳಿಸಿರುವವುಗಳ ಪೈಕಿ ಅತ್ಯಂತ ಪ್ರಯೋಜ-ನಕಾರಿಯೂ, ಪಾರಾಯಣ ವೇಳೆಯಲ್ಲಿ ಮೌನ ಪಾಲಿಸಿ ಆಲಿಸುವವುಗಳ ಪೈಕಿ ಅತ್ಯಂತ ಉತ್ಕೃಷ್ಟವಾದುದೂ ಆಗಿದೆ, ಏಕೈಕನೂ, ಅತ್ಯುದಾರಿಯೂ ಆದ ಅಲ್ಲಾಹು-ವಿನ ವಚನವಾದ ಕುರ್ಆನ್!

“ನೀನು ಮತ್ತು ಅವರೆಲ್ಲರೂ ಮಯ್ಯಿತ್ (ಮೃತರಾಗುವಿರಿ) ಆಗುವಿರಿ, ಆ ಬಳಿಕ ನೀವು ಅಂತ್ಯದಿನದಂದು ನಿಮ್ಮ ಪ್ರಭುವಿನ ಬಳಿ ತರ್ಕಿಸುವಿರಿ.” (ಕುರ್‌ಆನ್)


الحركة النصيحة الإسلامية

ANNASEEHA ISLAMIC MOVEMENT

SURATKAL, MANGALORE - 575 014
MOB: 9731593091 / 9945171612





Jamiyathe Ahle Hadees
Mangalore